**ಕಲಿಕಾ ನ್ಯೂನತೆ, ಹಾಗೂ ಸಾಕ್ಷರತೆ**

(SPECIFIC LEARNING DISABILITY, AND LITERACY)

**(ಸಾರ ಲೇಖನ)**

ಆರಂಭಿಕ ಸಾಕ್ಷರತೆಯ ಕುರಿತು ನÀಡೆಸಿದ ಹಲವಾರು ಸಂಶೋಧನೆಗಳು, ಓದುವಿಕೆ, ಬರೆಯುವಿಕೆ, ಅರ್ಥಗ್ರಹಣೆಗಳಲ್ಲಿ ಮಕ್ಕಳ ಪ್ರಗತಿಯು ಹಿನ್ನಡೆ ಹೊಂದಿದೆ ಎಂಬ ಗಂಭೀರ ಶೈಕ್ಷಣಿಕ ಸವಾ¯ನ್ನು ಹೊರಹಾಕಿವೆ. ಇದಕ್ಕೆ ಹಲವಾರು ಕಾರಣಗಳನ್ನೂ ಗುರುತಿಸಲಾಗಿದೆ. ಶಿಕ್ಷಣದ ಸ್ಥಿತಿಗತಿಯ ಕುರಿತ ವಾರ್ಷಿಕ ವರದಿ (ಎಎಸ್‌ಇಆರ್) (Annual Status of Educational Report- ASER) 2016ರ ಪ್ರಕಾರ ನಮ್ಮ ದೇಶದ ವಿದ್ಯಾರ್ಥಿಗಳ ಒಟ್ಟಾರೆ ಕಲಿಕೆಯ ಮಟ್ಟವು ತೀವ್ರವಾಗಿ ಕೆಳಮಟ್ಟದಲ್ಲಿದೆ. ಎಎಸ್‌ಇಆರ್‌ನ ವರದಿಗಳ ಪ್ರಕಾರ, ವಿದ್ಯಾರ್ಥಿಗಳ ಕಲಿಕೆಯಲ್ಲಿ ಕಂಡುಬರುವ ವೈಫಲ್ಯ ಇಂಗ್ಲಿಷ್ ಅಥವಾ ಇನ್ನಾವುದೇ ಭಾಷೆಯಲ್ಲಿ ಮಾತ್ರವಲ್ಲ, ಅವರವರ ಮಾತೃಭಾಷೆಯ ಕಲಿಕೆಯಲ್ಲೂ ಕಂಡುಬಂದಿದೆ. ಈ ಹಿನ್ನೆಲೆಯಲ್ಲಿ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ ಮತ್ತು ಟಾಟಾ ಟ್ರಸ್ಟ್‌ಗಳು ಜಂಟಿಯಾಗಿ ನಡೆಸಿದ ಅಧ್ಯಯನದಿಂದ ವಿವಿಧ ಸಾಮಾಜಿಕ, ಆರ್ಥಿಕ, ಸಾಂಸ್ಕøತಿಕ ಹಿನ್ನೆಲೆಗಳಿಂದ ಹೆಚ್ಚು ಹೆಚ್ಚು ವಿದ್ಯಾರ್ಥಿಗಳು ಬರುತ್ತಿರುವುದರಿಂದ ಶಿಕ್ಷಕರ ಸವಾಲುಗಳು ಇಮ್ಮಡಿಯಾಗಿರುವುದು ಒಂದು ಮುಖ್ಯ ಕಾರಣ ಎಂದು ವ್ಯಕ್ತವಾಗಿದೆ.

"ಸಾಕ್ಷರತೆ ಎಂಬುದು ಅರ್ಥಪೂರ್ಣವಾಗಿ ಓದಲು, ಬರೆಯಲು ಸಾಧ್ಯವಾಗುವುದು ಮತ್ತು ಇತರ ಕಲಿಕೆ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಸಬಲೀಕರಣಕ್ಕೆ ಬೇಕಾದ ಸಾಧನ" ಎಂಬ ನಿಲುವನ್ನು "Early Language and Literacy in India: A Position Paper, 2016" ನಲ್ಲಿ ಪ್ರತಿಪಾದಿಸಿದ್ದಾರೆ. ಆದ್ದರಿಂದ ಶಾಲಾಕೌಶಲಗಳಾದ ಓದುವಿಕೆ, ಬರೆಯುವಿಕೆ ಮತ್ತುಅರ್ಥಗ್ರಹಣಗಳಿಗೂ ಸಾಕ್ಷರತೆಗೂ ನಿಕಟವಾದ ಸಂಬಂಧವಿದೆ.

ಈ ಕಾರಣಗಳಲ್ಲದೆ ಈ ಕ್ಷೇತ್ರದಲ್ಲಿ ಕೆಲಸ ಮಾಡುವ ಎಲ್ಲರೂ ಗಮನಹರಿಸಬೇಕಾದ, ಆದರೆ ಬಹಳಷ್ಟು ಜನರ ಅರಿವಿಗೆ ಬಾರದ ಇನ್ನೊಂದು ಅತಿ ಮುಖ್ಯ ಕಾರಣವೆಂದರೆ, ಮಕ್ಕಳಲ್ಲಿ ಕಂಡುಬರುವ, ಆದರೆ ಸಾಮಾನ್ಯವಾಗಿ ಗುರುತಿಸಲ್ಪಡದೆ ಹೋಗುವಂತಹ "ಕಲಿಕಾ ನ್ಯೂನತೆ" ಎಂಬ ತೊಂದರೆ. (Neuro-Developmental Disorder). ಪ್ರಪಂಚದಲ್ಲಿ ಶೇ. 5- 20ರಷ್ಟು ಮಕ್ಕಳಲ್ಲಿ ಈ ದೋಷವು ಕಂಡು ಬಂದಿದೆ.

ಕೆಲವು ಮಕ್ಕಳಿಗೆ ಸರಿಯಾದ ಕಲಿಕೆಯ ವಾತಾವರಣ, ಬುದ್ಧಿಶಕ್ತಿಯ ಮಟ್ಟ, ಹಾಗೂ ಇತರ ಅನುಕೂಲಗಳಿದ್ದರೂ ಸಹ ಅವರ ಶಾಲಾ ಕೌಶಲಗಳಲ್ಲಿನ ವ್ಯತ್ಯಯಗಳಿಂದಾಗಿ ಕಲಿಕೆಯಲ್ಲಿ ಹಿಂದುಳಿಯುತ್ತಾರೆ. ಇದನ್ನು ಕಲಿಕಾ ನ್ಯೂನತೆ ಎಂದು ಕರೆಯುತ್ತಾರೆ. ಬೆಳವಣಿಗೆಯ ವಯಸ್ಸಿನಲ್ಲಿ ಶಾಲಾಕೌಶಲಗಳ ಸಹಜ ಮಾದರಿಯ ಗಳಿಕೆಯಲ್ಲಿ ತೊಡಕು ಉಂಟಾಗುವುದರಿಂದ ಈ ನ್ಯೂನತೆಗಳು ಉಂಟಾಗುತ್ತವೆ

ಈ ನಿಟ್ಟಿನಲ್ಲಿ, ಕಲಿಕಾ ನ್ಯೂನತೆಗಳಿಗೂ ಸಾಕ್ಷರತೆಗೂ ಇರುವ ನಿಕಟವಾದ ಸಂಬಂಧವನ್ನು ಅರ್ಥಮಾಡಿಕೊಳ್ಳುವುದು ಮಕ್ಕಳ ಸಾಕ್ಷರತೆಯ ದೃಷ್ಟಿಯಿಂದ ಅತೀ ಅವಶ್ಯಕವಾಗಿದೆ. ಏಕೆಂದರೆ, ಇಂತಹ ಮಕ್ಕಳನ್ನು ಆರಂಭಿಕ ಹಂತದಲ್ಲೇ ಗುರುತಿಸಿ, ಈ ಕೌಶಲಗಳನ್ನು ಉತ್ತಮಪಡಿಸಲು ಅವಶ್ಯಕವಾದ ಪರಿಹಾರ ಕ್ರಮಗಳನ್ನು/ ತಿದ್ದುವ ಮಾರ್ಗೋಪಾಯಗಳನ್ನು (remedial training) ಬಳಸಿದರೆ ಅವರನ್ನು ನಿಜವಾದ ಅರ್ಥದಲ್ಲಿ ಸಾಕ್ಷರರನ್ನಾಗಿ ಮಾಡಲು ಸಹಕಾರಿಯಾಗುತ್ತದೆ.

ಈ ಲೇಖನದಲ್ಲಿ ಕಲಿಕಾ ನ್ಯೂನತೆಗಳ ಬಗ್ಗೆ ಸಂಕ್ಷಿಪ್ತವಾದ ಸಾರಾಂಶಗಳನ್ನು ಕೊಡುವ ಪ್ರಯತ್ನ ಮಾಡಲಾಗಿದೆ.

ಮುಖ್ಯ ಪದಗಳು: ಕಲಿಕಾ ನ್ಯೂನತೆ, ಸಾಕ್ಷರತೆ,

ಡಾ. ಲಲಿತಾ ಭಟ್

ಮನಃಶಾಸ್ತ್ರಜ್ಞರು

**ಕಲಿಕಾ ನ್ಯೂನತೆ, ಹಾಗೂ ಸಾಕ್ಷರತೆ**

(SPECIFIC LEARNING DISABILITY, AND LITERACY)

**ಪ್ರಕರಣ 1.**

"ಇವನಿಗೆ 4 ವರ್ಷ, ಅವನು ಯಾವುದಕ್ಕೂ ಗಮನ ಕೊಡುವುದಿಲ್ಲ, ಊರಿನಲ್ಲಿ ಒಂದು ವರ್ಷ ಶಾಲೆಗೆ ಹೋಗಿದ್ದಾನೆÉ. ಅಲ್ಲಿ ಅವರು ಅಕ್ಷರ ಬರೆಯಲು ಕಲಿಸಿದ್ದಾರೆ. ಆದರೆÀ ಇವನಿಗೆ ಏನೂ ಬರುವುದಿಲ್ಲ. ಪೆನ್ಸಿಲು ಹಿಡಿದು ಸುಮ್ಮನೇ ಗೀಚುತ್ತಾನೆ. ಅಕ್ಷರ ಬರೆಯಲು ಬರುವುದಿಲ್ಲ, ಹೇಳಲೂ ಬರುವುದಿಲ್ಲ"

"ಈಗ ಶಾಲೆಗೆ ಸೇರಿಸಲು ಹೋಗಿದ್ದೆವು. ಅಲ್ಲಿ ಅವರು ಅವನನ್ನು ಪರೀಕ್ಷೆ ಮಾಡಿ ನೋಡಿ ಅವನಿಗೆ ಏನೂ ಬರುವುದಿಲ್ಲ, ನೀವು ಮನಃಶಾಸ್ತ್ರಜ್ಞರನ್ನು ಭೇಟಿಮಾಡಿ ಅವರಿಂದ ಅವನÀ ವಿವಿಧ ಸಾಮರ್ಥ್ಯಗಳ ಬಗ್ಗೆ ಒಂದು ವರದಿಯನ್ನು ತಂದು ಕೊಡಿ. ಅದನ್ನು ನೋಡಿ ನಂತರ ಶಾಲೆಗೆ ಸೇರಿಸಿಕೊಳ್ಳುವುದರ ಬಗ್ಗೆ ತಿಳಿಸುತ್ತೇವೆ ಎಂದು ಹೇಳಿದ್ದಾರೆ."

**ಪ್ರಕರಣ 2**

"ಇವಳು 3ನೆ ತರಗತಿಯಲ್ಲಿ ಓದುತ್ತಿದ್ದಾಳೆ. ಇನ್ನೂ ಅವಳಿಗೆ ಚಿಕ್ಕ ಚಿಕ್ಕ ಪದಗಳನ್ನೂ ಓದಲು ಬರುತ್ತಿಲ್ಲ. ಕೂಡಿಸಿ ಕೂಡಿಸಿ ಓದುತ್ತಾಳೆ. ಬರೆಯಲೂ ಬರುವುದಿಲ್ಲ. ಲೆಕ್ಕಗಳನ್ನೂ ತಪ್ಪು ಮಾಡುತ್ತಾಳೆ. ಮನೆಯಲ್ಲಿ ಚೆನ್ನಾಗಿ ಕಲಿಸುತ್ತೇವೆ, ಮನೆ ಪಾಠಕ್ಕೂ ಕಳುಹಿಸುತ್ತಿದ್ದೇವೆ, ಈಗ ಓದಿದ್ದು ಸ್ವಲ್ಪ ಹೊತ್ತಿನಲ್ಲಿ ಮರೆತುಬಿಡುತ್ತಾಳೆ."

**ಪ್ರಕರಣ 3**

"ನನ್ನ ಮಗ 6ನೆ ತರಗತಿಯಲ್ಲಿ ಓದುತ್ತಿದ್ದಾನೆ. ಇತ್ತೀಚೆಗೆ ಅವನಿಗೆ ಓದಿನಲ್ಲಿ ಗಮನ ಕಡಿಮೆ ಆಗಿದೆ. ಪರೀಕ್ಷೆಯಲ್ಲಿ ತುಂಬಾ ಕಡಿಮೆ ಅಂಕ ಪಡೆಯುತ್ತಾನೆ, ಕೆಲವೊಮ್ಮೆ ನಪಾಸಾಗುತ್ತಾನೆ. ಪರೀಕ್ಷೆಯಲ್ಲಿ ಏನೂ ಬರೆಯುವುದಿಲ್ಲ, ಮನೆಯಲ್ಲಿ ಉತ್ತರಗಳನ್ನು ಹೇಳುತ್ತಾನೆ, ಆದರೆ ಅಲ್ಲಿ ಮರೆತುಬಿಡುತ್ತಾನೆ"

ಇಂತಹ ಹಲವಾರು ಮಕ್ಕಳನ್ನು ನೀವೆಲ್ಲರೂ ನೋಡಿರಬಹುದು. ಇವರ ಬಗ್ಗೆ ಪೋಷಕರು ಅಥವಾ ಶಿಕ್ಷಕರು ಹೊಂದುವ ಸಾಮಾನ್ಯವಾದ ಅಭಿಪ್ರಾಯಗಳೆಂದರೆ- "ಇನ್ನೂ ಚಿಕ್ಕವನು, ಮುಂದೆ ಬೆಳೆಯುತ್ತಾ ಕಲಿಯುತ್ತಾನೆ, ತುಂಬಾ ಸೋಮಾರಿ ಅಥವಾ ದಡ್ಡ, ಮುದ್ದು ಮಾಡಿ ಹಾಳಾಗಿದ್ದಾನೆ" ಇತ್ಯಾದಿ.

**ಪ್ರಸ್ತಾವನೆ:**

ಆರಂಭಿಕ ಸಾಕ್ಷರತೆಯ ಕುರಿತು ನÀಡೆಸಿದ ಹಲವಾರು ಸಂಶೋಧನೆಗಳು, ಓದುವಿಕೆ, ಬರೆಯುವಿಕೆ, ಅರ್ಥಗ್ರಹಣೆಗಳಲ್ಲಿ ಮಕ್ಕಳ ಪ್ರಗತಿಯು ಹಿನ್ನಡೆ ಹೊಂದಿದೆ ಎಂಬ ಗಂಭೀರ ಶೈಕ್ಷಣಿಕ ಸವಾ¯ನ್ನು ಹೊರಹಾಕಿದೆ. ಇದಕ್ಕೆ ಹಲವಾರು ಕಾರಣಗಳನ್ನೂ ಗುರುತಿಸಲಾಗಿದೆ. ಶಿಕ್ಷಣದ ಸ್ಥಿತಿಗತಿಯ ಕುರಿತ ವಾರ್ಷಿಕ ವರದಿ (ಎಎಸ್ಇಆರ್) (Annual Status of Educational Report-ASER) 2016ರ ಪ್ರಕಾರ ನಮ್ಮ ದೇಶದ ವಿದ್ಯಾರ್ಥಿಗಳ ಒಟ್ಟಾರೆ ಕಲಿಕೆಯ ಮಟ್ಟವು ತೀವ್ರವಾಗಿ ಕೆಳಮಟ್ಟದಲ್ಲಿದೆ. 2018 ಜನವರಿಯ ವರದಿಯ ಪ್ರಕಾರ, ಪ್ರತಿ ಇಬ್ಬರಲ್ಲಿ ಒಬ್ಬ ವಿದ್ಯಾರ್ಥಿಗೆ ತನ್ನ ತರಗತಿಗಿಂತ ಮೂರು ತರಗತಿಯ ಕೆಳಗಿನ ತರಗತಿಗೆ ಇರುವ ಪಠ್ಯವನ್ನು ಓದಲು ಸಾಧ್ಯವಾಗುತ್ತಿಲ್ಲ, ಮತ್ತು 14 -18 ವರ್ಷದ ಮಕ್ಕಳಲ್ಲಿ ಕೇವಲ 43% ಮಕ್ಕಳು ಮಾತ್ರ ಭಾಗಾಕಾರದ ಲೆಕ್ಕಗಳನ್ನು ಮಾಡಲು ಸಮರ್ಥರಾಗಿದ್ದಾರೆ. ಎಎಸ್ಇಆರ್ನ ವರದಿಗಳ ಪ್ರಕಾರ, ವಿದ್ಯಾರ್ಥಿಗಳ ಕಲಿಕೆಯಲ್ಲಿ ಕಂಡುಬರುವ ವೈಫಲ್ಯ ಇಂಗ್ಲಿಷ್ ಅಥವಾ ಇನ್ನಾವುದೇ ಭಾಷೆಯಲ್ಲಿ ಮಾತ್ರವಲ್ಲ, ಅವರವರ ಮಾತೃಭಾಷೆಯ ಕಲಿಕೆಯಲ್ಲೂ ಕಂಡುಬಂದಿದೆ. ವಿವಿಧ ಸಾಮಾಜಿಕ, ಆರ್ಥಿಕ, ಸಾಂಸ್ಕøತಿಕ ಹಿನ್ನೆಲೆಗಳಿಂದ ಹೆಚ್ಚು ಹೆಚ್ಚು ವಿದ್ಯಾರ್ಥಿಗಳು ಬರುತ್ತಿರುವುದರಿಂದ ಶಿಕ್ಷಕರ ಸವಾಲುಗಳು ಇಮ್ಮಡಿಯಾಗಿರುವುದು ಒಂದು ಮುಖ್ಯ ಕಾರಣ ಎಂದು ಅಜೀಂ ಪ್ರೇಮ್ ಜಿ ವಿಶ್ವವಿದ್ಯಾಲಯ ಮತ್ತು ಟಾಟಾ ಟ್ರಸ್ಟ್‌ಗಳು ಜಂಟಿಯಾಗಿ ನಡೆಸಿದ ಅಧ್ಯಯನದಿಂದ ವ್ಯಕ್ತವಾಗಿದೆ.

“ಸಾಕ್ಷರತೆ ಎಂಬುದು ಅರ್ಥಪೂರ್ಣವಾಗಿ ಓದಲು, ಬರೆಯಲು ಸಾಧ್ಯವಾಗುವುದು ಮತ್ತು ಇತರ ಕಲಿಕೆ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಸಬಲೀಕರಣಕ್ಕೆ ಬೇಕಾದ ಸಾಧನ” ಎಂಬ ನಿಲುವನ್ನು “Early Language and Literacy in India: A Position Paper,2016” ನಲ್ಲಿ ಪ್ರತಿಪಾದಿಸಿದ್ದಾರೆ. ಆದ್ದರಿಂದ ಶಾಲಾಕೌಶಲಗಳಾದ ಓದುವಿಕೆ, ಬರೆಯುವಿಕೆ ಮತ್ತುಅರ್ಥಗ್ರಹಣಗಳಿಗೂ ಸಾಕ್ಷರತೆಗೂ ನಿಕಟವಾದ ಸಂಬಂಧವಿದೆ.

ಈ ನಿಟ್ಟಿನಲ್ಲಿ, ಮೇಲೆ ಹೇಳಿದ ಕಾರಣಗಳಲ್ಲದೆ ಈ ಕ್ಷೇತ್ರದಲ್ಲಿ ಕೆಲಸ ಮಾಡುವ ಎಲ್ಲರೂ ಗಮನಹರಿಸಬೇಕಾದ ಇನ್ನೊಂದು ಅತೀ ಮುಖ್ಯ ಆದರೆ ಬಹಳಷ್ಟು ಜನರ ಅರಿವಿಗೆ ಬಾರದ ಕಾರಣವೆಂದರೆ, ಮಕ್ಕಳಲ್ಲಿ ಕಂಡುಬರುವ, ಆದರೆ sಸಾಮಾನ್ಯವಾಗಿ ಗುರುತಿಸಲ್ಪಡದೆ ಹೋಗುವಂತಹ “ಕಲಿಕಾ ನ್ಯೂನತೆ” ಎಂಬ ತೊಂದರೆ. ಇವುಗಳನ್ನು Specific developmental disorders of scholastic skills ಎಂದು ವರ್ಗೀಕರಣದ ಕೈಪಿಡಿ - ICD -10 (The International Classification of Mental and Behavioural Disorders) ನಲ್ಲಿ ಹೆಸರಿಸಿದ್ದಾರೆ. ಪ್ರಪಂಚದಲ್ಲಿ ಶೇ. 5- 15ರಷ್ಟು ಮಕ್ಕಳಲ್ಲಿ ವಿವಿಧ ರೀತಿಯ ಕಲಿಕಾ ನ್ಯೂನತೆಯು ಕಂಡು ಬಂದಿದೆ. ಇವರಲ್ಲಿ ಶೇ. 80ರಷ್ಟು ಮಕ್ಕಳಿಗೆ ಓದುವಿಕೆಯ ತೊಂದರೆ ಇದೆ. ಇದಲ್ಲದೆ ಹಲವು ಅಧ್ಯಯನಗಳ ಪ್ರಕಾರ ಶಾಲಾ ವಯಸ್ಸಿನ ಶೇ. 4ರಷ್ಟು ಮಕ್ಕಳಲ್ಲಿ ಓದುವಿಕೆಯ ತೊಂದರೆ ಇದೆ. (ಕರಾಂಡೆ, ಶೋಲಾಪುರವಾಲಾ ಮತ್ತು ಕುಲಕರ್ಣಿ, 2011). ಕುರಿಯನ್ ಮತ್ತು ಜೇಮ್ಸ್ (2018) ಅವರ ಅಧ್ಯಯನದ ಪ್ರಕಾರ, ನಮ್ಮ ದೇಶದÀÀಲ್ಲಿ ಶೇ. 10 ರಷ್ಟು ಮಕ್ಕಳಲ್ಲಿ ವಿವಿಧ ರೀತಿಯ ಕಲಿಕಾನ್ಯೂನತೆಗಳು ಇವೆ ಎಂದು ತಿಳಿಸಿದ್ದಾರೆ.

**ಕಲಿಕಾ ನ್ಯೂನತೆ (Specific developmental disorders of scholastic skills):**

ಈ ಮೇಲಿನ ಹಿನ್ನೆಲೆಯನ್ನಿಟ್ಟುಕೊಂಡು ಈಗ ಕಲಿಕಾ ನ್ಯೂನತೆಯೆಂದರೆ ಏನೆಂದು ಅರ್ಥಮಾಡಿಕೊಳ್ಳೋಣ. ಬೆಳವಣಿಗೆಯ ವಯಸ್ಸಿನಲ್ಲಿ ಶಾಲಾಕೌಶಲಗಳ ಸಹಜ ಮಾದರಿಯ ಗಳಿಕೆಯಲ್ಲಿ ತೊಡಕು ಉಂಟಾಗುವುದರಿಂದ ಈ ನ್ಯೂನತೆಗಳು ಉಂಟಾಗುತ್ತವೆ. ಇವುಗಳು ಕಲಿಕೆಯ ಅವಕಾಶವಿಲ್ಲದೆ, ಅಥವಾ ಯಾವುದೇ ರೀತಿಯ ಮೆದುಳಿನ ತೊಂದರೆಗಳಿಂದ ಆಗುವ ನ್ಯೂನತೆಗಳಲ್ಲ, ಬದಲಾಗಿ ಇವುಗಳು ಸಂಜ್ಞಾನಾತ್ಮಕ ಪ್ರಕ್ರಿಯೆಗಳಲ್ಲಿನ ಅಸಹಜತೆಯಿಂದ ಹುಟ್ಟಿಕೊಳ್ಳುತ್ತವೆ. (ICD -10, 1992). ಇದರ ವ್ಯಾಖ್ಯಾನವು ಹೀಗಿದೆ “ಭಾಷೆಯನ್ನು ಅರ್ಥಮಾಡಿಕೊಳ್ಳಲು ಅಥವಾ ಬಳಸಲು, ಅಂದರೆ,- ಕೇಳಿಸಿಕೊಳ್ಳಲು, ಮಾತನಾಡಲು ಅಥವಾ ಬರೆಯಲು - ಅಥವಾ ಗಣಿತದ ಲೆಕ್ಕಗಳನ್ನು ಮಾಡಲು ಬೇಕಾದ ಒಂದು ಅಥವಾ ಅದಕ್ಕಿಂತ ಹೆಚ್ಚು ಪ್ರಕ್ರಿಯೆಗಳಲ್ಲಿನ ತೊಂದರೆಗಳಿಗೆ ಕಲಿಕಾನ್ಯೂನತೆ ಎನ್ನಬಹುದು. ಇತರ ನ್ಯೂನತೆಗಳಾದ ಕಿವುಡುತನ, ದೃಷ್ಟಿಮಾಂದ್ಯತೆ, ಬುದ್ಧಿಮಾಂದ್ಯತೆ, ಭಾಷಾ ತೊಂದರೆಗಳು ಅಥವಾ ಇತರ ದೈಹಿಕ ನ್ಯೂನತೆಗಳಿಂದ ಉಂಟಾಗುವ ಕಲಿಕೆಯ ತೊಂದರೆಗಳನ್ನು ಇದು ಒಳಗೊಂಡಿಲ್ಲ. (Federal Register,1977, p. 65083)

**ಕಲಿಕಾ ನ್ಯೂನತೆಗಳ ವಿಶ್ಲೇಷಣೆಯ ಮಾರ್ಗಸೂಚಿಗಳು:**

ಈ ಕಲಿಕಾ ನ್ಯೂನತೆಗಳನ್ನು ನಿರ್ಧರಿಸಲು ಕೆಲವು ಮೂಲಭೂತ ಅಂಶಗಳಿವೆ. ಮೊದಲನೆಯದಾಗಿ, ಮಗುವಿನಲ್ಲಿ ಯಾವುದೇ ಶಾಲಾ ಕೌಶಲದಲ್ಲಿ ಗಮನಾರ್ಹ ತೊಂದರೆ ಇರಬೇಕು; ಈ ತೊಂದರೆಗಳಿಗೂ ಮೊದಲು ಶಾಲಾಪೂರ್ವ ವಯಸ್ಸಿನಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ಮಾತು ಮತ್ತು ಭಾಷಾ ಬೆಳವಣಿಗೆಗಳು ನಿಧಾನವಾಗಿರುವುದು; ಇತರ ತೊಂದರೆಗಳಾದ ಗಮನದ ಕೊರತೆ, ಅತೀಚಟುವಟಿಕೆ, ಭಾವನಾತ್ಮಕ ತೊಂದರೆಗಳು; ಹಾಗೂ ಶಾಲಾ ಕೌಶಲಗಳ ಅಭಿವೃದ್ಧಿಗೆ ಹೆಚ್ಚುವರಿ ಬೆಂಬಲ ಕೊಟ್ಟಾಗಲೂ ಅವುಗಳ ಅಭಿವೃದ್ಧಿಯಾಗದಿರುವುದು. ಎರಡನೆಯದಾಗಿ, ಈ ತೊಂದರೆಯು ಬುದ್ಧಿಮಾಂದ್ಯತೆಯಿಂದ ಉಂಟಾಗಿರುವುದಲ್ಲ, ಅಂದರೆ, ಮಗುವಿನ ಶಾಲಾ ಕೌಶಲವು ಅವನ/ಳ ಬೌದ್ಧಿಕ ವಯಸ್ಸಿಗನುಗುಣವಾಗಿ ಇರಬೇಕಾದ್ದಕ್ಕಿಂತ ಗಣನೀಯವಾಗಿ ಕೆಳಮಟ್ಟದಲ್ಲಿರಬೇಕು.

ಮೂರನೆಯದಾಗಿ, ಈ ತೊಂದರೆಗಳು ಬೆಳವಣಿಗೆಯ ವಯಸ್ಸಿನಿಂದಲೂ ಇರಬೇಕು ಹಾಗೂ ಶಾಲಾಕಲಿಕಾ ಪ್ರಕ್ರಿಯೆಯ ಸಂದರ್ಭದಲ್ಲಿ ಗಳಿಸಿಕೊಂಡವುಗಳಲ್ಲ.

**ವಿವಿಧ ರೀತಿಯ ಕಲಿಕಾ ನ್ಯೂನತೆಗಳು:**

1. ಓದುವಿಕೆಯ ನ್ಯೂನತೆಗಳು (Specific reading disorder)
2. ಅಕ್ಷರ/ ಪದಗಳ ಬರೆಯುವಿಕೆಯಲ್ಲಿ / ಕಾಗುಣಿತ ಬರೆಯುವ ನ್ಯೂನತೆಗಳು (Specific spelling disorder)
3. ಬರೆಯುವಿಕೆಯಲ್ಲಿ ನ್ಯೂನತೆಗಳು (Specific writing disorder)
4. ಗಣಿತದ ಲೆಕ್ಕಗಳನ್ನು ಮಾಡುವುದರಲ್ಲಿ ನ್ಯೂನತೆಗಳು (Specific disorder of arithmetic skills)
5. ವಿವಿಧ ಶಾಲಾ ಕೌಶಲಗಳ ನ್ಯೂನತೆ (Mixed disorder of Scholastic skills) – ಇದು ಅಕ್ಷರ/ ಪದಗಳ ಬರೆಯುವಿಕೆಯಲ್ಲಿ / ಕಾಗುಣಿತ ಬರೆಯುವ ನ್ಯೂನತೆಗಳು ಮತ್ತು ಗಣಿತದ ಲೆಕ್ಕಗಳನ್ನು ಮಾಡುವುದರಲ್ಲಿ ನ್ಯೂನತೆಗಳನ್ನೊಳಗೊಂಡಿದೆ.
6. ಅಮೌಖಿಕ ಕಲಿಕಾ ನ್ಯೂನತೆ (Nonverbal learning disorder)

ಕಲಿಕಾನ್ಯೂನತೆಯ ವಿವಿಧ ಲಕ್ಷಣಗಳು:

ಬೌದ್ಧಿಕ ಮಟ್ಟ: ಮಕ್ಕಳ ಬುದ್ಧಿಮತ್ತೆಗೂ ಅವರ ಶೈಕ್ಷಣಿಕ ಸಾಧನೆಗಳಿಗೂ ಗಮನಾರ್ಹ ವ್ಯತ್ಯಾಸವಿರುವುದು, ಅಂದರೆ, ನಿರೀಕ್ಷೆಗಿಂತ
ಕೆಳಮಟ್ಟದಲ್ಲಿರುವುದು.

**ಶೈಕ್ಷಣಿಕವಾಗಿ:**

1. ಅಸ್ಥಿರವಾದ/ ಏರಿಳಿತಗಳಿoz ಕೂಡಿದÀ ((inconsistent)) ಶೈಕ್ಷಣಿಕ ಸಾಧನೆಗಳು.
2. ಗಮನದ ಕೊರತೆ ಮತ್ತು ಸುಲಭವಾಗಿ ಗಮನಭಂಗವಾಗುವುದು (easy distractability)
3. ಪುಸ್ತಕಗಳ ಮತ್ತು ಇತರ ಶಾಲಾ ಸಂಬಂಧಿತ ಸಲಕರಣೆಗಳನ್ನು ಅಸ್ತವ್ಯಸ್ತವಾಗಿ ಇಟ್ಟುಕೊಳ್ಳುವುದು.
4. ಮೌಖಿಕ ಸೂಚನೆಗಳನ್ನು ಮತ್ತು ತರಗತಿಯಲ್ಲಿನ ಚರ್ಚೆಗಳನ್ನು ಅನುಸರಿಸಲು ಮತ್ತು ಅರ್ಥಮಾಡಿಕೊಳ್ಳಲು ಹೆಚ್ಚು ಕಷ್ಟವಾಗುವುದು, ಯಾವುದೋ ಯೋಚನೆಯಲ್ಲಿ ಮುಳುಗಿದಂತೆ/ ಕನಸು ಕಾಣುತ್ತಿರುವಂತೆ ಕಾಣುವುದು.

**ವಿವಿಧ ಹಂತಗಳಲ್ಲಿ ಕಲಿಕಾ ನ್ಯೂನತೆ (Specific Learning Disbility –SLD)ಯ ಸೂಚಕಗಳು**:

**ಪ್ರಾಥಮಿಕ ಶಾಲಾಪೂರ್ವ ಹಂತದಲ್ಲಿ:**

ಪ್ರಾಥಮಿಕ ಶಾಲಾಪೂರ್ವ ಹಂತದಲ್ಲಿ ಅಂದರೆ, 3 ರಿಂದ 5 ವರ್ಷಗಳ ಅವಧಿಯಲ್ಲಿ ಇರಬೇಕಾದ ಭಾಷಾ ಸಂಬಂಧಿತ ಕೌಶಲಗಳಲ್ಲಿ ಕೆಲವು ತೊಂದರೆಗಳನ್ನು ಗಮನಿಸಬಹುದು, ಇವುಗಳನ್ನು ಕಲಿಕಾನ್ಯೂನತೆಯ ಸೂಚಕಗಳೆಂದು ತಿಳಿದುಕೊಳ್ಳಬಹುದು. ಅವುಗಳೆಂದರೆ;

· ವಯಸ್ಸಿಗನುಗುಣವಾಗಿ ಮಾತನಾಡಲು ಕಷ್ಟವಾಗುವುದು
· ಹೇಳಿದ ಸುಲಭ ವಾಕ್ಯವನ್ನು ಪುನರುಚ್ಚರಿಸಲು ಕಷ್ಟವಾಗುವುದು
· ಮೌಖಿಕ ಸೂಚನೆಗಳನ್ನು ಅನುಸರಿಸಲು/ ಪಾಲಿಸಲು ಕಷ್ಟವಾಗುವುದು. ಉದಾ: “ಎರಡು ಬಾರಿ ಚಪ್ಪಾಳೆ ಹೊಡೆ” ,

- ವಿವಿಧ ಧ್ವನಿಮಾಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಕಷ್ಟವಾಗುವುದು. ಉದಾ: ಆಪಲ್, ಬಾಲ್, ಡಾಲ್.
- ಹೊಸ ಪದಗಳನ್ನು ಕಲಿಯಲು ಕಷ್ಟವಾಗುವುದು
- ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗುವುದು
- ಪ್ರಾಸಬದ್ಧ ಪದಗಳನ್ನು ಗುರುತಿಸಲು ಕಷ್ಟವಾಗುವುದು
- ವಸ್ತುಗಳ ಹೆಸರು ಮತ್ತು ಬಣ್ಣಗಳನ್ನು ಹೇಳಲು ಕಷ್ಟವಾಗುವುದು
- ಅಕ್ಷರಗಳನ್ನು ಓದಲು ಇಷ್ಟಪಡದಿರುವುದು
- ಅಕ್ಷರಗಳನ್ನು ಗುರುತಿಸಲು ಮತ್ತು ಕಲಿಯಲು ಮತ್ತು ನೆನಪಿಟ್ಟು ಕೊಳ್ಳಲು ಕಷ್ಟವಾಗುವುದು
- ಧ್ವನಿಮಾಗಳಿಗೂ ಪದಗಳಿಗೂ ಇರುವ ಸಂಬಂಧಗಳನ್ನು ಹೊಂದಿಸಲು ಕಷ್ಟವಾಗುವುದು (Difficulty learning the connection between letters and sounds)
- ಎಣಿಕೆ ಮಾಡಲು ಕಷ್ಟವಾಗುವುದು

**ಪ್ರಾಥಮಿಕ ಶಾಲಾ ಹಂತದಲ್ಲಿ -** 5-7 ವರ್ಷದವರೆಗೆ ಈ ಕೆಳಗಿನ ಕೆಲವು ತೊಂದರೆಗಳು ಕಲಿಕಾ ನ್ಯೂನತೆಯನ್ನು ಸೂಚಿಸುತ್ತವೆ.

- . ಗಮನದಲ್ಲಿ ಕೊರತೆ
- ದೃಶ್ಯ ಪ್ರಕ್ರಿಯೆಗಳ  ತೊಂದರÉ

- ಒಂದೇತೆರನಾಗಿರುವ ಅಕ್ಷರಗಳನ್ನು ಮತ್ತು ಅಂಕೆಗಳನ್ನು ಗುರುತಿಸುವುದರಲ್ಲಿ ಗೊಂದಲ. ಉದಾ: 3, 2, 5, 2, 8-ಇವುಗಳಲ್ಲಿ ಯಾವ ಎರಡು ಒಂದೇತೆರನಾಗಿವೆ?
- ಅಕ್ಷರಗಳನ್ನು, ಕಾಗುಣಿತಗಳನ್ನು, ಅಂಕೆಗಳನ್ನು ಬರೆಯಲು ಕಷ್ಟವಾಗುವುದು
- ಓದುವಾಗ ಅಥವಾ ಬರೆಯುವಾಗ ಅಕ್ಷರಗಳನ್ನು ಅಥವಾ ಅಂಕೆಗಳನ್ನು/ ಸಂಖ್ಯೆಗಳನ್ನು ತಿರುಗಿ ಅಥವಾ ಹಿಂದುಮುಂದಾಗಿ ಬರೆಯುವುದು. ಉದಾ: dog ಯ ಬದಲಾಗಿ bog, was ನ ಬದಲಾಗಿ saw, 6 ರ ಬದಲಾಗಿ 9, 31ರ ಬದಲಾಗಿ 13 ಬರೆಯುವುದು. ಇದು ಮುಂದಿನ ತರಗತಿಗಳಲ್ಲೂ ಮುಂದುವರಿಯಬಹುದು.

- **ಶ್ರವಣ ಪ್ರಕ್ರಿಯೆಗಳ ತೊಂದರೆ**

- ಸಾಮ್ಯವಿರುವ ಪದಗಳನ್ನು ಕೇಳಿದಾಗ ಅವುಗಳ ವ್ಯತ್ಯಾಸವನ್ನು ಗುರುತಿಸುವುದರಲ್ಲಿ ಗೊಂದಲ. ಉದಾ: ದನ - ಧನ, ಬಾಲೆ - ಬಲೆ
- ಕೇಳಿದ್ದನ್ನು ನೆನಪಿಟ್ಟುಕೊಂಡು ಪುನರುಚ್ಚರಿಸುವುದು. ಉದಾ: 2-3 ಪದಗಳಿರುವ ವಾಕ್ಯವನ್ನು ಪುನರುಚ್ಚರಿಸುವುದು
- ಅದೇರೀತಿ 2-3 ವಸ್ತುಗಳ ಹೆಸರುಗಳನ್ನು ನೆನಪಿಟ್ಟುಕೊಂಡು ಹೇಳುವುದು
- ಮಾತು ಮತ್ತು ಭಾಷೆಯ ಬಳಕೆಯಲ್ಲಿ ವ್ಯತ್ಯಯ – ಒಂದು ವಸ್ತುವಿನ (ಉದಾ: ಚೆಂಡು) ಬಗ್ಗೆ 4 – 5 ವಾಕ್ಯಗಳನ್ನು ಹೇಳಲು ಕಷ್ಟವಾಗುವುದು

**ಮಾಧ್ಯಮಿಕ ಶಾಲಾ ಹಂತದಲ್ಲಿ – 8 – 12 ವರ್ಷದವರಲ್ಲಿ ಕಂಡುಬರುವ ತೊಂದರೆಗಳು**:

- ಗಮನದಲ್ಲಿ ಕೊರತೆಯು ಇನ್ನೂ ಮುಂದುವರಿಯುತ್ತದೆ. ಇದರ ಲಕ್ಷಣಗಳೆಂದರೆ- ಸುಲಭವಾಗಿ ಗಮನ ಭಂಗವಾಗುವುದು (easy distractability), ಓದುವಾಗ, ಬರೆಯುವಾಗ ಅಕ್ಷರ, ಪದಗಳನ್ನು ಬಿಟ್ಟುಬಿಡುವುದು, ಸಾಲುಗಳನ್ನು ಬಿಡುವುದು. ಹೇಳಿದ್ದನ್ನು ಕೇಳಿಸಿಕೊಳ್ಳದಿರುವುದು. ಇತ್ಯಾದಿ

· ಓದುವಿಕೆಯ ತೊಂದರೆಗಳು (Reading Difficulties)-

- ಒಂದೊಂದೇ ಪದಗಳನ್ನು ಬಿಡಿ ಬಿಡಿಯಾಗಿ ಓದುವುದು
- ವಿರಾಮ ಚಿಹ್ನೆಗಳನ್ನು ಗಮನಿಸದೆ ಓದುವುದು
- ಹೊಸ ಪದಗಳನ್ನು /ಪರ್ಯಾಯ ಪದ ಓದುವುದು (word substitution)
- ಇರುವ ಪದಗಳನ್ನು, ಸಾಲುಗಳನ್ನು ಬಿಡುವುದು
- ಹೊಸ ಅಕ್ಷರಗಳನ್ನು ಸೇರಿಸುವುದು,
- ಧ್ವನಿಮಾಗಳನ್ನು ಗುರುತಿಸಿ ಓದಲು ಕಷ್ಟವಾಗುವುದು
- ಪದಗಳ ಅಕ್ಷರಗಳನ್ನು ಬಿಡಿ ಬಿಡಿಯಾಗಿ ಓದುವುದು
- ಪದಗಳನ್ನು ಊಹಿಸಿಕೊಂಡು ಓದುವುದು, ಪದಗಳನ್ನು, ಅಕ್ಷರ, ಅಂಕೆಗಳನ್ನು ತಿರುವು ಮುರುವಾಗಿ ಓದುವುದು ಇತ್ಯಾದಿಗಳು.
-

· ಗ್ರಹಿಸುವುದರ ತೊಂದರೆಗಳು (difficulties in comprehension)-

- ಓದಿರುವುದನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗುವುದು
- ಪ್ರಶ್ನೆಗಳಿಗೆ ಉತ್ತರಿಸಲು ಕಷ್ಟವಾಗುವುದು

· ಬರೆಯುವಿಕೆಯ ತೊಂದರೆಗಳು (Writing difficulties)-

- ಲೇಖನಿಯನ್ನು ಸರಿಯಾಗಿ ಹಿಡಿಯದಿರುವುದು
- ಪುಸ್ತಕದಿಂದ ಅಥವಾ ಕಪ್ಪುಹಲಗೆಯಿಂದ ತಪ್ಪಿಲ್ಲದೆ ನಕಲು ಮಾಡಲು ಕಷ್ಟವಾಗುವುದು
- ಅಕ್ಷರಗಳನ್ನು ಮೂಡಿಸುವ ತೊಂದರೆಗಳು, ಹೆಚ್ಚು ಒತ್ತಿ ಬರೆಯುವುದು
- ಗೆರೆಗಳ ಮೇಲೆ ಸರಿಯಾಗಿ ಬರೆಯಲು ಕಷ್ಟವಾಗುವುದು.
- ಅಕ್ಷರಗಳ ಗಾತ್ರದ ಪರಿಮಾಣವನ್ನು ಅಂದಾಜುಮಾಡಲು ಕಷ್ಟವಾಗುವುದು.
- ಪದಗಳ ನಡುವಿನ ಅಂತರವನ್ನು ಸರಿಯಾಗಿ ನಿರ್ವಹಿಸಲು ಕಷ್ಟವಾಗುವುದು. ಚಿತ್ರಗಳಲ್ಲಿ, ರೇಖಾಚಿತ್ರಗಳಲ್ಲಿನ, ಅಕ್ಷರಗಳಲ್ಲಿನ ವ್ಯತ್ಯಾಸಗಳು ಅಥವಾ ಸಾಮ್ಯಗಳನ್ನು ಗುರುತಿಸಲು ಕಷ್ಟವಾಗುವುದು.
- ರೇಖಾಚಿತ್ರಗಳನ್ನು ಬರೆಯಲು, ಕೋನಾಕೃತಿಗಳನ್ನು ಬರೆಯಲು ಕಷ್ಟವಾಗುವುದು.
- ಅಕ್ಷರ/ ಅಂಕೆಗಳನ್ನು ತಿರುವು ಮುರುವಾಗಿ ಬರೆಯುವುದು
- ನಿಧಾನವಾಗಿ ಬರೆಯುವುದು
- ಬರೆಯಲು ಉದಾಸೀನ ಮಾಡುವುದು, ಬರೆದ ಮೇಲೆ ಕೈ ನೋವೆಂದು ಹೇಳುವುದು
- ಅನಗತ್ಯ ಅಕ್ಷರ/ ಪ್ರತ್ಯಯಗಳನ್ನು ಸೇರಿಸುವುದು ಉದಾ:
- ಅಲ್ಪಪ್ರಾಣ/ ಮಹಾಪ್ರಾಣಗಳ ತಪ್ಪುಗಳು, ಆಂಗ್ಲಭಾಷೆಯಲ್ಲಿ ಕ್ಯಾಪಿಟಲ್ ಮತ್ತು ಸಣ್ಣ ಅಕ್ಷರಗಳನ್ನು ಸರಿಯಾದ ಜಾಗಗಳಲ್ಲಿ ಬರೆಯದಿರುವುದು. ಉದಾ: India ಎಂಬಲ್ಲಿ india ಎಂದು ಬರೆಯುವುದು.


No. of errors -
Remarks: 10th std girl.
Expression:
(Write the response verbatim)
(1) Girl : I Saw a girl who Name is Rama.
(2) Walking : Everyday you should walking.
(3) He : He is a good boy
(4) Write a few lines about "SCHOOL"
My School Name M.E.S. Kishora Kendra
In our School there are more 2000 Students.
In our School teacher teach us were well.

**ಚಿತ್ರ 1: 10ನೇ ತರಗತಿಯ ವಿದ್ಯಾರ್ಥಿಯ ಬರೆಯುವಿಕೆಯಲ್ಲಿನ ತಪ್ಪುಗಳು**

· ಕಾಗುಣಿತದ ಮತ್ತು ವ್ಯಾಕರಣದ ತಪ್ಪುಗಳು (Spelling and grammar difficulties)-

- ಧ್ವನಿಮಾಗಳ ಆಧಾರದ ಮೇಲೆ ಪದಗಳನ್ನು ಬರೆಯುವುದು ಉದಾ: “said” – “sed”, “tight” – “tite” ಇತ್ಯಾದಿ. ಅಥವಾ ಮನಬಂದಂತೆ ಬರೆಯುವುದು.

- ಪದಗಳಲ್ಲಿನ ಅಕ್ಷರಗಳ ನಡುವೆ ಸರಿಯಾದ ಅಂತರವಿಲ್ಲದಿರುವುದು.

- ವ್ಯಾಕರಣದ ನಿಯಮಗಳು ಅರ್ಥವಾಗದಿರುವುದು

- ಪುಟ್ಟ ಪುಟ್ಟ ವಾಕ್ಯಗಳು ಅಥವಾ ತಪ್ಪು ತಪ್ಪಾದ, ಉದ್ದವಾದ, ಅಸಂಪೂರ್ಣ ವಾಕ್ಯಗಳು.



**ಚಿತ್ರ 2: 10ನೇ ತರಗತಿಯ ವಿದ್ಯಾರ್ಥಿಯ ಅಕ್ಷರ ತಪ್ಪುಗಳು (spelling mistakes)**



**ಚಿತ್ರ 3: 8ನೇ ತರಗತಿಯ ವಿದ್ಯಾರ್ಥಿಯ ಬರೆಯುವಿಕೆಯಲ್ಲಿನ- ಕಾಗುಣಿತದ ತಪ್ಪುಗಳು**

· ಗಣಿತದ ಲಕ್ಷಣಗಳು (Arithmetic difficulties):

- ಅಂಕೆಗಳನ್ನು ಕಲಿಯಲು ಕಷ್ಟವಾಗುವುದು.
- ಹಿಂದಿನ ಅಥವಾ ಮುಂದಿನ ಅಂಕೆ / ಸಂಖ್ಯೆಯನ್ನು ಹೇಳಲು ಕಷ್ಟವಾಗುವುದು.
- ಸಂಖ್ಯೆಗಳ ಸ್ಥಾನ ಬೆಲೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗದಿರುವುದು
- ಗಣಿತದ ಚಿಹ್ನೆಗಳನ್ನು (+, _ = ಇತ್ಯಾದಿ) ಅರ್ಥಮಾಡಿಕೊಳ್ಳಲು ಕಷ್ಟವಾಗುವುದು.
- ಗಣಿತದ ಲೆಕ್ಕಗಳನ್ನು ಮಾಡುವಾಗ ಅನುಸರಿಸಬೇಕಾದ ಹಂತಗಳನ್ನು, ಕ್ರಮಗಳನ್ನು ನೆನಪಿಟ್ಟುಕೊಳ್ಳಲು ಅಥವಾ ಅದರಂತೆ ಮಾಡಲು ಕಷ್ಟವಾಗುದು.
- ಆಕಾರ, ಗಾತ್ರ, ಪರಿಮಾಣ, ಸಮಯ ಇತ್ಯಾದಿ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗುವುದು.
- ರೇಖಾಚಿತ್ರಗಳನ್ನು ಬರೆಯುವಾಗ ಅವುಗಳ ಉದ್ದ, ಅಗಲ, ಕೋನಗಳನ್ನು ಸಮ ಪ್ರಮಾಣದಲ್ಲಿ ಬರೆಯಲು ಕಷ್ಟವಾಗುವುದು ಮತ್ತು ಇದರಿಂದ ಚಿತ್ರವು ವಿರೂಪಗೊಳ್ಳುವುದು.




**ಚಿತ್ರ 1: 10ನೇ ತರಗತಿಯ ವಿದ್ಯಾರ್ಥಿಯ ಗಣಿತದ ತಪ್ಪುಗಳು**

**ಅಮೌಖಿಕ ಕಲಿಕಾ ನ್ಯೂನತೆ (Nonverbal learning disorder):**

ಈ ರೀತಿಯ ಕಲಿಕಾ ನ್ಯೂನತೆಯಲ್ಲಿ, ಮೌಖಿಕ ಕೌಶಲಗಳಿಗೂ (verbal skills), ಆಂಗಿಕ ಕೌಶಲಗಳು(motor skills) ಮತ್ತು ಸಾಮಾಜಿಕ ಕೌಶಲಗಳಿಗೂ (social skills) ಗಮನಾರ್ಹ ವ್ಯತ್ಯಾಸವಿರುತ್ತದೆ. ಕೆಲವು ಲಕ್ಷಣಗಳು:

- ಉತ್ತಮವಾದ ಮೌಖಿಕ ಕೌಶಲಗಳು
- ನಾಜೂಕುತನವಿಲ್ಲವಿರುವುದು
- ಕತ್ತರಿಯಿಂದ ಕತ್ತರಿಸುವುದು, ಚಿತ್ರಕ್ಕೆ ನಾಜೂಕಾಗಿ ಬಣ್ಣ ಹಾಕುವುದು ಮುಂತಾದ ಸೂಕ್ಷ್ಮ ಕೆಲಸಗಳನ್ನು ಮಾಡಲು ಕಷ್ಟಪಡುವುದು
- ದೈನಂದಿನ ಚಟುವಟಿಕೆಗಳ/ ನಿತ್ಯಕ್ರಮಗಳ ಬದಲಾವಣೆಯಾದಲ್ಲಿ ಹೊಂದಿಕೊಳ್ಳಲು ಕಷ್ಟವಾಗುವುದು.
- ಆಂಗಿಕ ಭಾಷೆ (body language), ಮುಖದ ಭಾವನೆಗಳನ್ನು ಅರ್ಥಮಾಡಿಕೊಳ್ಳಲು ಕಷ್ಟಪಡುವುದು

-	ಕಳಪೆಯಾದ / ಸಾಧಾರಣವಾದ ಸಾಮಾಜಿಕ ಕೌಶಲಗಳು

**ಭಾರತದಲ್ಲಿ ಕಲಿಕಾ ನ್ಯೂನತೆ:**

ನಮ್ಮ ದೇಶದಲ್ಲಿ ಕಲಿಕಾ ನ್ಯೂನತೆಯ ಬಗ್ಗೆ ಹೆಚ್ಚಿನ ಅರಿವು ಇಲ್ಲ. ಇತ್ತೀಚೆಗೆ, ಕಳೆದ ಒಂದೆರಡು ದಶಕಗಳಿಂದÀ ಹೆಚ್ಚಿನ ಅರಿವು ಮೂಡುತ್ತಿದೆ. ಕೆಲವು ಅಧ್ಯಯನಗಳ ಪ್ರಕಾರ, ಸುಮಾರು ಶೇಕಡಾ 10 -15 ಮಕ್ಕಳಲ್ಲಿ ವಿವಿಧ ರೀತಿಯ ಕಲಿಕಾ ನ್ಯೂನತೆಗಳು ಕಂಡು ಬರುತ್ತಿವೆ. ನಮ್ಮ ದೇಶದಲ್ಲಿ ವಿವಿಧ ಅಧ್ಯಯನಕಾರರು 2000 ಇಸವಿಯಿಂದ 2017ರವರೆಗೆ ಕಲಿಕಾ ನ್ಯೂನತೆಯ ಬಗ್ಗೆ ವಿವಿಧ ಜಾಗಗಳಲ್ಲಿ ನಡೆಸಿದ ಅಧ್ಯಯನಗಳ ಪರಿಶೀಲನಾ ಅಧ್ಯಯನ ಮಾಡಿದ ಕುರಿಯನ್, ಮತ್ತು ಜೇಮ್ಸ್ (2018) ಅವರ ಪ್ರಕಾರ ಸರಾಸರಿ ಶೇ. 10ರಷ್ಟು ಮಕ್ಕಳಲ್ಲಿ ವಿವಿಧರೀತಿಯ ಕಲಿಕಾ ನ್ಯೂನತೆಗಳು ಕಂಡು ಬಂದಿವೆ. ಈ ಕೆಳಗಿನ ಗ್ರಾಫ್‌ನಿಂದ ಇದನ್ನು ಅರ್ಥಮಾಡಿಕೊಳ್ಳಬಹುದು.




Source: Kuriyan N M & James J K (2018). Prevelance of Learning Disability in India: Need for Mental Health Awareness.

**ಪರಿಸಮಾಪ್ತಿ:**

ಈ ಹಿನ್ನೆಲೆಯಲ್ಲಿ ಗಮನಿಸಬೇಕಾದ ಅಂಶವೆಂದರೆ, ಇಂತಹ ತೊಂದರೆಗೊಳಗಾದ ಪ್ರತಿಯೊಂದು ಮಗುವಿಗೂ ತನ್ನ ಸಾಮರ್ಥ್ಯಗಳಿಗನುಗುಣವಾಗಿ ಶೈಕ್ಷಣಿಕ ಸಾಧನೆ ಮಾಡುವ ಅವಕಾಶಗಳು ಸಿಗಬೇಕು. ಇದನ್ನು ಸಾಧಿಸಬೇಕಾದರೆ ಪೂರ್ವ ಪ್ರಾಥಮಿಕ ಶಾಲಾ ಹಂತದಲ್ಲಿ, ಅಥವಾ ಪ್ರಾಥಮಿಕ ಶಾಲಾ ಹಂತದಲ್ಲಿ ಶಿಕ್ಷಕರಲ್ಲಿ ಇದರ ಬಗ್ಗೆ ಅರಿವನ್ನು ಮೂಡಿಸಬೇಕು ಮತ್ತು ಅಂತಹ ಮಕ್ಕಳನ್ನು ಗುರುತಿಸಲು ಬೇಕಾದ ಪ್ರಾಥಮಿಕ ತರಬೇತಿಯನ್ನು ಕೊಡಬೇಕು. NCERT ಯ ಸರ್ವಶಿಕ್ಷ ಅಭಿಯಾನದಲ್ಲಿ ಇಂತಹ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣದಲ್ಲಿ ಯಾವ ರೀತಿಯ ಬದಲಾವಣೆಗಳನ್ನು ಮಾಡಿಕೊಂಡು ಅವರಿಗೆ ಕಲಿಸಬೇಕು ಎಂಬುದನ್ನು ವಿವರವಾಗಿ ತಿಳಿಸಿದ್ದಾರೆ. Inclusive Education ನ್ನು ಇದರಲ್ಲಿ ಹೆಚ್ಚು ಪ್ರತಿಪಾದಿಸಿದ್ದಾರೆ. ಇದರ ಜೊತೆಗೆ ಶಾಲಾ ಆಡಳಿತಮಂಡಳಿಯು ಅಂತಹ ಮಕ್ಕಳಿಗೆ ಕಲಿಸಲು ಅವಶ್ಯಕವಾದ ಸಂಪನ್ಮೂಲ ತರಗತಿಗಳ ವ್ಯವಸ್ಥೆ ಮಾಡಬೇಕು. ಈ ನಿಟ್ಟಿನಲ್ಲಿ ಕೆಲಸ ಮಾಡಿದರೆ ಮಾತ್ರ ನಿಜವಾದ ಅರ್ಥದಲ್ಲಿ ಸಾಕ್ಷರತೆಯನ್ನು ಸಾಧಿಸಲು ಸಾಧ್ಯ.

References

Early Language and Literacy in India: A position Paper (2016) https://www.careindia.org/sites/default/files/ELL%20India%20%28revised%20pdf%29.pdf

ICD -10 (1992) The ICD-10 Classification of Mental and Behavioural Disorders: Clinical descriptions and diagnostic guidelines. WHO, Geneva, Oxford University Press, Walton Street, Oxford.

Karande S., Sholapurwala R., and Kulkarni M. (2011) Managing Specific Learning Disability in Schools in India. Indian Pediatrics, Vol 48, July 17.

Karanth P. Learning disabilities in the Indian context. [Online]. 2002 [cited 2006 March]; Available from: URL: http://www.nalandainstitute.org/aspfiles/

Kuriyan N M & James J K (2018). Prevelance of Learning Disability in India: Need for Mental Health Awareness. https://www.researchgate.net/publication/324277803

Pant K.C. (2002). A Handbook for Parents of Children with Disabilities. Govt. of India Planning Commission (Education Division)

Reddy, M.V. AND Hnumantappa M. (2017). Kannada Phonemes to Speech Dictionary: Statistical Approach Int. Journal of Engineering Research and Application www.ijera.com ISSN : 2248-9622, Vol. 7, Issue 1, ( Part -4) January 2017, pp.77-80